CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೩, ೨೦೦೪ (ಆಶ್ವಯುಜ ೧, ಶಕ ವರ್ಷ ೧೯೨೬) | ಸಂಚಿಕೆ ೩೯ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ಕಂದಾಯ ಸಚಿವಾಲಯ

**ವಿಷಯ:** ಬೆಂಗಳೂರು ಉತ್ತರ ತಾಲ್ಲೂಕು ಉಪ ನೋಂದಣಿ ಕಛೇರಿಯನ್ನು ಕೆ.ಐ.ಎ.ಡಿ.ಬಿ., ಪೀಣ್ಯ ಇಲ್ಲಿಗೆ ಸ್ಥಳಾಂತರಿಸುವ ಬಗ್ಗೆ.

**ಓದಲಾಗಿದೆ:**
1. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಪ್ರಸ್ತಾವನೆ ಸಂಖ್ಯೆ: ಬಿ.ಎಲ್.ಡಿ.1:96-97, ದಿನಾಂಕ:10.12.2003 ಮತ್ತು 30.01.2004.
2. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಬಿ.ಎಲ್‌ಡಿ:1:96-97, ದಿನಾಂಕ: 04.05.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರು ಪ್ರಸ್ತಾವನೆ ಸಲ್ಲಿಸಿ, ಬೆಂಗಳೂರು ಉತ್ತರ ಉಪ ನೋಂದಣಿ ಕಛೇರಿ ಕರ್ತವ್ಯ ನಿರ್ವಹಿಸುತ್ತಿರುವ ಕಟ್ಟಡವು ಮೂಲಭೂತ ಸೌಕರ್ಯಗಳಿಂದ ಕೂಡಿರದೆ ನಾಗರೀಕ ವಾಸ ಸ್ಥಳದಲ್ಲಿ ಇದ್ದು, ಸದರಿ ಕಛೇರಿಯ ಸುತ್ತ ಮುತ್ತ ಬಹಳ ಅವ್ಯವಸ್ಥೆಯಿಂದ ಕೂಡಿದ್ದು, ಬಹಳ ತೊಂದರೆಯಾಗುತ್ತಿದ್ದು ಓಡಾಡಲು ದಾರಿ ಇಕ್ಕಟ್ಟಾಗಿದ್ದು, ಸದರಿ ಕಛೇರಿಯಲ್ಲಿ ಗಣಕೀಕರಣಕ್ಕೂ ಹೆಚ್ಚಿನ ಸ್ಥಳಾವಕಾಶ ಬೇಕಾಗಿರುವುದರಿಂದ, ಸದರಿ ಕಛೇರಿಯನ್ನು ಪೀಣ್ಯ 3ನೇ ಬ್ಲಾಕ್‌ನಲ್ಲಿರುವ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ಕಟ್ಟಡಕ್ಕೆ ಲೋಕೋಪಯೋಗಿ ಇಲಾಖೆ ನಿಗದಿಪಡಿಸಿರುವ ಚದರ ಅಡಿಗೆ ರೂ. 6.50ಯಂತೆ ಮಂಡಳಿಯು ಒಪ್ಪಿಗೆ ಪತ್ರವನ್ನು ಲಗತ್ತಿಸಿ ಸ್ಥಳಾಂತರಕ್ಕೆ ಮಂಜೂರಾತಿ ಕೋರಿದ್ದರು. ದಿನಾಂಕ: 30.01.2004ರ ಪತ್ರದಲ್ಲಿ ಪೀಣ್ಯದಲ್ಲಿರುವ ಕಟ್ಟಡ ಸುಮಾರು 4,444 ಚ.ಅ. ಉಳ್ಳದ್ದಾಗಿದ್ದು, ಇಲ್ಲಿ 8 ಗಣಕೀಕರಣ ಸಿಸ್ಟಮ್‌ಗಳನ್ನು ಏಕಕಾಲದಲ್ಲಿ ಅಳವಡಿಸಬಹುದಾಗಿದ್ದು, ಇದರಿಂದ ನೋಂದಣಿ ಕ್ರಿಯೆಯನ್ನು ತ್ವರಿತಗತಿಯಲ್ಲಿ ಮಾಡಬಹುದಾಗಿರುತ್ತದೆ ಎಂದು ತಿಳಿಸಿದ್ದಾರೆ. ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಮ್ಯಾನೇಜಿಂಗ್ ಡೈರೆಕ್ಟರ್, ಕೆ.ಐ.ಎ.ಡಿ.ಬಿ. ಅವರು ದೂರವಾಣಿ ಕರೆ ಮಾಡಿ ಮಾತನಾಡಿ ಉಪ ನೋಂದಣಿ ಕಛೇರಿಯನ್ನು ಸದರಿ ಹೊಸ ಕಟ್ಟಡಕ್ಕೆ ಸ್ಥಳಾಂತರಿಸದೇ ಇರುವುದರಿಂದ, ಬೇರೆಯವರಿಗೆ ಬಾಡಿಗೆ ಕೊಡಲು ಆಗದೇ ತಮಗೆ ಬಹಳ ತೊಂದರೆಯಾಗಿರುವುದಾಗಿ ತಿಳಿಸಿರುತ್ತಾರೆ ಮತ್ತು ಕಟ್ಟಡವನ್ನು ವಶಕ್ಕೆ ತೆಗೆದುಕೊಂಡು ಬಾಡಿಗೆ ಸಂದಾಯ ಮಾಡುವಂತೆ ಕೋರಿದ್ದು, ದಿನಾಂಕ: 19.05.2004ರಂದು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಉತ್ತರ ಉಪನೋಂದಣಿ ಕಛೇರಿಯನ್ನು ಸರ್ಕಾರದ ಅನುಮತಿ ಕಾಯ್ದಿರಿಸಿ, ಕೆ.ಐ.ಎ.ಡಿ.ಬಿ. ಕಟ್ಟಡ, ಪೀಣ್ಯ ಇಲ್ಲಿಗೆ ಸ್ಥಳಾಂತರಿಸಿದ್ದು, ಸ್ಥಳಾಂತರಿಸಿರುವ ಕ್ರಮಕ್ಕೆ ಅನುಸಮರ್ಥನೆ ನೀಡುವಂತೆ ಕೋರಿರುತ್ತಾರೆ. ಕೆ.ಐ.ಎ.ಡಿ.ಬಿ. ಕಟ್ಟಡಕ್ಕೆ ಲೋಕೋಪಯೋಗಿ ಇಲಾಖೆಯವರು ನಿಗದಿಪಡಿಸಿರುವ ಮಾಸಿಕ ಬಾಡಿಗೆ ರೂ. 28,886-00 ಆಗಿರುತ್ತದೆ. ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 2 ಮುನೋಸ 2003, ಬೆಂಗಳೂರು, ದಿನಾಂಕ: 21ನೇ ಆಗಸ್ಟ್, 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಂಗಳೂರು ಉತ್ತರ ತಾಲ್ಲೂಕು ಉಪ ನೋಂದಣಿ ಕಛೇರಿಯನ್ನು ಕೆ.ಐ.ಎ.ಡಿ.ಬಿ. ಕಟ್ಟಡ, ಪೀಣ್ಯ, ಇಲ್ಲಿಗೆ ಸರ್ಕಾರದ ಅನುಮತಿ ಕಾಯ್ದಿರಿಸಿ ದಿನಾಂಕ: 19.05.2004ರಂದು ಸ್ಥಳಾಂತರಿಸುವ ಕ್ರಮಕ್ಕೆ

ಸರ್ಕಾರದ ಘಟನೋತ್ತರ ಅನುಮತಿಯನ್ನು ನೀಡಲಾಗಿದೆ. ಸದರಿ ಕಟ್ಟಡ 4,444 ಚ.ಅ. ಉಳ್ಳದ್ದಾಗಿದ್ದು, ಮಾಸಿಕ ರೂ. 28,886-00 (ರೂಪಾಯಿ ಇಪ್ಪತ್ತೆಂಟು ಸಾವಿರದ ಎಂಟು ನೂರ ಎಂಭತ್ತಾರು) ರೂಗಳ ಬಾಡಿಗೆ ನಿಗದಿಪಡಿಸಲಾಗಿದೆ.

ಇದರಿಂದ ಉಂಟಾಗುವ ವೆಚ್ಚವನ್ನು 2003-2004ನೇ ಸಾಲಿನ ಲೆಕ್ಕ ಶೀರ್ಷಿಕೆ "2030-03-001-1-00-071" ರಡಿ ಭರಿಸತಕ್ಕದ್ದು.

ಈ ಆದೇಶವನ್ನು ಆದೇಶ ಸಂಖ್ಯೆ: ಎಫ್‌ಡಿ 1 ಟಿ.ಎಫ್.ಪಿ. 96, ದಿನಾಂಕ: 10.07.96ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ನಿಯೋಜಿಸಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಜಿ. ನಾರಾಯಣ**
ಪೀಠಾಧಿಕಾರಿ,
ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

ಪಿ.ಆರ್.959

**ವಿಷಯ:** ಇಸ್ಲಾಮಿಕ್ ಮಿಷನ್ ಆಫ್ ಇಂಡಿಯಾ (ಐ.ಎಂ.ಐ) ಈ ಸಂಸ್ಥೆಗೆ ನೇಮಕ ಮಾಡಿರುವ ಆಡಳಿತಾಧಿಕಾರಿ ಅವಧಿ ವಿಸ್ತರಣೆ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಕಂ.ಇ. 18 ಮುನೋಸೊ 2003, ದಿನಾಂಕ: 11.08.2003.
2. ಸರ್ಕಾರಿ ಆದೇಶ ಸಂಖ್ಯೆ: ಕಂ.ಇ. 18 ಮುನೋಸೊ 2003, ದಿನಾಂಕ: 19.02.2004.
3. ಆಡಳಿತಾಧಿಕಾರಿ, ಇಸ್ಲಾಮಿಕ್ ಮಿಷನ್ ಆಫ್ ಇಂಡಿಯಾ ಹಾಗೂ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ರಾಜ್ಯ ಮೀಸಲು ಪಡೆ, ಬೆಂಗಳೂರು ರವರ ಪತ್ರ ಸಂಖ್ಯೆ: ಎಡಿಜಿಪಿ:ಐಎಂಐ: ಆಡಳಿತ: 2004, ದಿನಾಂಕ: 19.08.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಇಸ್ಲಾಮಿಕ್ ಮಿಷನ್ ಆಫ್ ಇಂಡಿಯಾ (ಐಎಂಐ), ನ್ಯಾಷನಲ್ ಪಾರ್ಕ್ ರಸ್ತೆ, ಬೆಂಗಳೂರು-76, ಈ ಸಂಸ್ಥೆಯು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960ರ ಪ್ರಕಾರ ಕಾರ್ಯನಿರ್ವಹಿಸದೇ ಇದ್ದುದರಿಂದ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡಲಾಗಿತ್ತು. ನಂತರ ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ಆಡಳಿತಾಧಿಕಾರಿಯ ಅವಧಿಯನ್ನು ವಿಸ್ತರಿಸಲಾಗಿತ್ತು. ಸದರಿ ಅವಧಿಯು ದಿನಾಂಕ: 10.08.2004ಕ್ಕೆ ಮುಗಿದಿದ್ದು, ಮೇಲೆ ಓದಲಾದ (3)ರ ಪತ್ರದಲ್ಲಿ ಆಡಳಿತಾಧಿಕಾರಿ, ಇಸ್ಲಾಮಿಕ್ ಮಿಷನ್ ಆಫ್ ಇಂಡಿಯಾ ಹಾಗೂ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ರಾಜ್ಯ ಮೀಸಲು ಪಡೆ, ಬೆಂಗಳೂರು ರವರು ಹಲವಾರು ಕಾರಣಗಳಿಂದ ಮತ್ತು ಸಂಸ್ಥೆಯ ಸದಸ್ಯರಲ್ಲಿ ಹೊಂದಾಣಿಕೆ ಇಲ್ಲದ ಪ್ರಯುಕ್ತ, ಸದರಿ ಸಂಸ್ಥೆಗೆ ಚುನಾವಣೆಯನ್ನು ನಡೆಸಲು ಸಾಧ್ಯವಾಗಿರುವುದಿಲ್ಲ ಹಾಗೂ ಸದರಿ ಸಂಸ್ಥೆಗೆ ಹೊಸದಾಗಿ ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯದಿಂದ ಅಫಿಲಿಯೇಷನ್ ಪಡೆಯಲು ಪತ್ರ ವ್ಯವಹಾರಗಳನ್ನು ನಡೆಸುತ್ತಿದ್ದು, ಸ್ವಲ್ಪ ದಿನಗಳಲ್ಲಿಯೇ ಅಫಿಲಿಯೇಷನ್ ಪಡೆಯುವ ಹಂತದಲ್ಲಿರುವುದರಿಂದ ಮತ್ತೆ 6 ತಿಂಗಳ ಅವಧಿಗೆ ಆಡಳಿತಾಧಿಕಾರಿಯ ಅವಧಿಯನ್ನು ವಿಸ್ತರಿಸುವಂತೆ ಕೋರಿರುತ್ತಾರೆ. ಈ ಹಿನ್ನೆಲೆಯಲ್ಲಿ, ಆಡಳಿತಾಧಿಕಾರಿಯವರ ವರದಿಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಸಾರ್ವಜನಿಕ ಹಿತದೃಷ್ಟಿಯಿಂದ ಸದರಿ ಸಂಸ್ಥೆಗೆ ನೇಮಕ ಮಾಡಲಾದ ಆಡಳಿತಾಧಿಕಾರಿಯ ಅವಧಿಯನ್ನು ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಶ್ರೀ ಎ.ಆರ್. ಇನ್‌ಫೆಂಟ್, ಐ.ಪಿ.ಎಸ್. ರವರು ಕಾರ್ಯದರ್ಶಿ, ಒಳಾಡಳಿತ ಇಲಾಖೆ ಇಲ್ಲಿಂದ ವರ್ಗಾವಣೆ ಹೊಂದಿ ಪೊಲೀಸ್ ಮಹಾನಿರ್ದೇಶಕರು ಕರ್ನಾಟಕ ರಾಜ್ಯ ಮೀಸಲು ಪಡೆ ಹುದ್ದೆಯ ಕಾರ್ಯಭಾರ ವಹಿಸಿಕೊಂಡಿದ್ದು, ಸದರಿಯವರನ್ನೇ ಮೇಲ್ಕಂಡ ಸದರಿ ಸಂಸ್ಥೆಯ ಆಡಳಿತಾಧಿಕಾರಿಯಾಗಿ ಮುಂದುವರಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 18 ಮುನೋಸೊ 2003, ಬೆಂಗಳೂರು, ದಿನಾಂಕ: 28ನೇ ಆಗಸ್ಟ್, 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸಂಸ್ಥೆಯ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ, ಇಸ್ಲಾಮಿಕ್ ಮಿಷನ್ ಆಫ್ ಇಂಡಿಯಾ (ಐ.ಎಂ.ಐ) ನ್ಯಾಷನಲ್ ಪಾರ್ಕ್ ರಸ್ತೆ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-76, ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960ರ ಕಲಂ-2ಎ, ಪ್ರಕಾರ ನೇಮಕ ಮಾಡಲಾದ ಆಡಳಿತಾಧಿಕಾರಿಯವರ ಅವಧಿಯನ್ನು ದಿನಾಂಕ: 11.08.2004ರಿಂದ ಮತ್ತೆ 6 ತಿಂಗಳ ಅವಧಿಗೆ ಅಥವಾ ಸದರಿ ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ, ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಯವರು ಈ ವಿಸ್ತರಣಾ ಅವಧಿಯೊಳಗೆ ಸಂಸ್ಥೆಯ ಅವ್ಯವಹಾರಗಳನ್ನು ಸರಿಪಡಿಸಿ, ಸದರಿ ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಜಿ. ನಾರಾಯಣ**
ಪೀಠಾಧಿಕಾರಿ,
ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

ಪಿ.ಆರ್.960

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ಹುದ್ದೆಗಳನ್ನು ರದ್ದುಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಆದೇಶ ಸಂಖ್ಯೆ: ಪಿಡಿ 73 ಪಿಎಂಎಂ 84, ದಿನಾಂಕ: 02.01.1996.
2. ಆದೇಶ ಸಂಖ್ಯೆ: ಪಿಡಿ 61 ಪಿಎಂಎಂ 2000, ದಿನಾಂಕ: 11.09.2000.
3. ಅನಧಿಕೃತ ಟಿಪ್ಪಣಿ ಸಂಖ್ಯೆ: ಪಿಡಿ 68 ಪಿಎಂಎಂ 2004, ದಿನಾಂಕ: 14.07.2004.

**ಪ್ರಸ್ತಾವನೆ:**

ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾಗಿರುವ ಆದೇಶದಲ್ಲಿ ಯೋಜನೆ, ಸಾಂಸ್ಥಿಕ ಹಣಕಾಸು ಮತ್ತು ಸಾಂಖ್ಯಿಕ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯಲ್ಲಿನ 7 ವಿಭಾಗಗಳ ಪುನರ್ ರಚನೆ ಮಾಡಿ ಈ ಹಿಂದೆ 9 ಕಾರ್ಯ ವಿಭಾಗಗಳನ್ನಾಗಿ ಸೃಜಿಸಲಾಗಿದೆ.

1. ಮೌಲ್ಯಮಾಪನ ವಿಭಾಗ-1
2. ಮೌಲ್ಯಮಾಪನ ವಿಭಾಗ-2
3. ಯೋಜನೆ, ಹಣಕಾಸು ಮತ್ತು ಸಂಪನ್ಮೂಲ ವಿಭಾಗ.
4. ಜಿಲ್ಲಾ ಯೋಜನಾ ವಿಭಾಗ
5. ಪ್ರದೇಶಾಭಿವೃದ್ಧಿ ಮಂಡಳಿ ವಿಭಾಗ
6. ಜನಶಕ್ತಿ ಮತ್ತು ಉದ್ಯೋಗ ವಿಭಾಗ
7. ಸಂಪೂರ್ಣ ಯೋಜನಾ ವಿಭಾಗ
8. ಯೋಜನೆ, ಸಂಯೋಜನೆ ಮತ್ತು ಮಾಹಿತಿ ವಿಭಾಗ
9. ಪರಿಯೋಜನಾ ರಚನಾ ವಿಭಾಗ.

ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಮೌಲ್ಯ ಮಾಪನ ವಿಭಾಗವನ್ನು ಹ್ಯೂಮನ್ ಡೆವಲಪ್‌ಮೆಂಟ್ ಡಿವಿಜನ್ ಎಂದು ಪುನರ್ ರಚಿಸಲಾಗಿದೆ.

ಪ್ರಸ್ತುತ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಯೋಜನೆ ಮತ್ತು ಸಾಂಖ್ಯಿಕ ಇಲಾಖೆ ಇವರು ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿನಾಂಕ: 14.07.2004ರ ಅನಧಿಕೃತ ಟಿಪ್ಪಣಿಯಲ್ಲಿ ತಿಳಿಸಿರುವ 7 ಜಂಟಿ ನಿರ್ದೇಶಕರ ಹುದ್ದೆಗಳ ಪೈಕಿ ದಿನಾಂಕ: 01.04.2000 ರಂದು ಖಾಲಿ ಇದ್ದು ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 02 ಈಕಾಅ 2004, ದಿನಾಂಕ: 01.03.2004 ರನ್ವಯ ಖಾಲಿ ಇರುವ 4 ಹುದ್ದೆಗಳಲ್ಲಿ ಶೇ.80 ರಷ್ಟು ಹುದ್ದೆಗಳು ಅಂದರೆ 3 ಹುದ್ದೆಗಳನ್ನು ರದ್ದುಪಡಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 25 ಸಸಿವಿ 97, ಬೆಂಗಳೂರು, ದಿನಾಂಕ: 26ನೇ ಆಗಸ್ಟ್, 2004**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಯೋಜನಾ ಮತ್ತು ಸಾಂಖ್ಯಿಕ ಇಲಾಖೆಯ ಈ ಕೆಳಕಾಣಿಸಿದ ವಿಭಾಗಗಳಲ್ಲಿರುವ ಜಂಟಿ ನಿರ್ದೇಶಕರ 3 (ಮೂರು) ಹುದ್ದೆಗಳನ್ನು ಸದರಿ ಹುದ್ದೆಗಳಿಗೆ ಇರಬಹುದಾದ ಪೂರಕ ಸಿಬ್ಬಂದಿಗಳೊಡನೆ ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

| | | |
|---|---|---|
| 1. | ಜನಶಕ್ತಿ ಮತ್ತು ಉದ್ಯೋಗ ವಿಭಾಗ | 1 ಹುದ್ದೆ |
| 2. | ಸಂಪೂರ್ಣ ಯೋಜನಾ ವಿಭಾಗ | 1 ಹುದ್ದೆ |
| 3. | ಪರಿಯೋಜನಾ ರಚನಾ ವಿಭಾಗ | 1 ಹುದ್ದೆ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್.961

## ENERGY SCRETARIAT

**Sub:** Transfer of 5 M.W. capacity Kattepura Mini Hydel Project from Cauvery Hydro energy Limited to M/s Sai Nireeha Power Project Limited-Orders relating to.

**Ref:**
1. Government Order No. DE 28 NCE 96 (15), Dated: 24.07.1996.
2. Government Order No. DE 46 NCE 97, Dated: 24.06.1999.
3. Government Order No. DE 3 NCE 2002, Dated: 01.04.2002.
4. Letter No. KRED/ 06/ Kattepura/ 2004/ 1523, Dated: 16.08.2004 received from the Managing Director, Karnataka Renewable Energy Development Limited, Bangalore.

**Preamble:**

In the Government Order Dated: 24.07.1996 cited (1) above, 5 M.W. capacity Mini Hydel Project at Kattepura in Hassan District was sanctioned to M/s Paper Packing Private Limited. In the Government Order Dated: 24.06.1999 cited (2) above the said company was permitted to change it's name as M/s Bright Vidyuth Company Private Limited. Further in the Government letter Dated: 01.04.2002 cited (3) above. M/s Bright Vidyuth Comapny Private Limited was permitted to change it's name as M/s Cauvery Hydro Energy Limited for implementation of said project.

2. The Managing Director, Karnataka Renewable Energy Development Limited, Bangalore, in his letter Dated: 16.08.2004 cited (4) above has reported that M/s Cauvery Hydro Energy Limited has entered into agreeement with the Government on 06.03.2002 and done much progress in the implementation of the project. Further the said company has implemented 3 M.W. Shiva project. This project is close to Kattepura, anekattu. There is sufficient flow of water and the project is technically and

financialy feasible. Further M/s Sai Nireeha Power Project Private Limited, is interested in the implementation of the said project. Hence the Managing Director, Karnataka Renewable Energy Development Limited, has therefore recommended for transfer of 5 M.W. capacity Kattepura Mini Hydel Project of M/s Cauvery Hydro Energy Limited and their clearances to M/s Sai Nireeha Power Project Private Limited.

3. The proposal has been examined. Hence the Order.

**Government Order No. DE 248 NCE 2004, Bangalore, Dated: 26th August, 2004**

4. In the circumstances, explained above, Government after careful consideration are pleased to transfer 5 M.W. Kattepura Mini Hydel Project of M/s Cauvery Hydro Energy Limited and their clearances to M/s Sai Nireeha Power Project Private Limited. No: 8-38 Lawyerpet, Ongole-523 001, Prakasam district, Andhra Pradesh.

5. All other terms and conditions of the Government orders read above remains the same.

By Order and in the name of the Governor of Karnataka,
**K.L. JAYARAM**
Under Secretary to Government,
Energy Department.

PR-958

**INFRASTRUCTURE DEVELOPMENT SECRETARIAT**

**Subject:** Release of funds for acquisition of lands for construction of approach for the Road over bridge in lieu of L.C. No. 95 in Pandavapura-Orders.

**Read:**
1. G.O. No. IDD 26 NSW 2003, Dated: 31.03.2003.
2. G.O. No. IDD 13 NSW 2001, Dated: 26.07.2003.
3. G.O. No. IDD 21 UIP 04, Dated: 19.07.2004.
4. Letter No. CBS/ಹಭಪ-ಭೂಸ್ವಾಧೀನ-ಮಂಡ್ಯ:ವಿ: 04-05 Dated: 6th August, 2004, from Chief Engineer, C & B (S), Bangalore.

**Preamble:**

1. In Government order read at (1) above, Government have sanctioned the new plan scheme for the construction of 12 ROBs/ RUBs in the State, the details of which are given in Annexure I of the said G.O.

2. In Government order read at (2) above, sanction has been accorded to include the construction of a ROB in lieu of L.C. No. 95 at KM 119/4-5 in Pandavapura in the above scheme.

3. The construction of the approach road to the above ROB requires acquisition of land. Chief Engineer, C&B (South), Bangalore, in his letter read at (4) above, has stated that Assistant Commissioner, Pandavapura has requested Executive Engineer, Public Works Department, Mandya Division to deposit an amount of Rs.12,11,140/- towards 50% cost of land acquisition (8-11 acres land: i.e. 3-21 $^{1}/_{2}$ acres of dry land @ Rs. 51,000/-per acre+3-30 acres of wet land at the rate of Rs. 1,26,000/- per acre and 0.39 guntas of Garden land at the rate of Rs. 1,44,000) as also compensation for buildings and malkies and including other charges as per KLR Act.

4. In G.O. Dated: 19.07.2004, read at Sl.No. 3 above 14 ongoing schemes of the Infrastructure Development Department have been sanctioned.

5. The proposal of Chief Engineer, Communication & Buildings (South) has been examined and Government issues the following order.

**Government Order No. IDD 97 NSW 2003, Bangalore, Dated: 30th August, 2004**

1. Government are pleased to sanction and release a sum of Rs. 12,11,140-00 (Rupees twelve lakhs and eleven thousand and rupees one hundred forty only) towards the expenditure of acquisition of 8-11 acres of land for construction of approach road for the Road Over Bridge in lieu of L.C. No. 95 119/4-5 between Pandavapura-Srirangapatna Railway Station on the Sri rangapatna-Bidar Road.

2. This expenditure shall be met out under the "Head of Account 5465-01-190-3-04-211-KRIDE-ROB/RUB Projects-Investments (Plan)"

3. Managing Director, iDeCK is authorized draw this amount on a Payee's Receipt countersigned by the Under Secretary to Government, Infrastructure Development Department.

4. This order issues presuming the concurrence of Finance Department vide Government order No.FD 1 TFP 96, Dated: 10.07.1996.

By Order and in the name of the Governor of Karnataka,
**T.B. RENUKAPRASAD**
Under Secretary to Government,
Infrastructure Development Department.

PR-963

## ENERGY SECRETARIAT

**Subject:** Enhancement of Wind Power Capacity from 6 M.W. to 9 M.W. in favour of M/s Mysore Mercantile Company Limited, - orders relating to.

**Read:** 1. Government Order No. DE 208 NCE 2004, Dated: 26.06.2004.

2. Letter No. KRED/08/ MMCL/ 2003/ 1579, Dated:23.08.2004 received from the Managing Director, Karnataka Renewable Energy Development Limited, Bangalore.

**Preamble:**

In the Government Order read at (1) above, sanction has been accorded to implement 6 M.W. capacity Wind Power Project at Borenahalli and Mathighatta in Chitradurga District by M/s Mysore Mercantile Company Limited.

(2) In the letter read at (2) above the Managing Director, Karnataka Renewable Energy Development Limited, Bangalore, has recommended to enhance the capacity from 6 M.W. to 9 M.W by installing 6 No's of 1500 K.W. capacity wind turbine generator.

(3) Hence, the following order:

**Government Order No. DE 303 NCE 2004, Bangalore, Dated: 25th August, 2004**

(4) In the circumstances explained in the preamble and after careful consideration Government are pleased to permit the enhancement of wind power capacity from 6 M.W. to 9 M.W. in favour of M/s Mysore Mercantile Company Limited at Borenehalli and Mathighatta Village in Chitradurga District. The other terms and conditions of the original Government Order read at (1) above, shall **IPSOFACTO** applicable.

By Order and in the name of the Governor of Karnataka,

**K.L. JAYARAM**

PR-964

Under Secretary to Government,

Energy Department.

## ಕಾರ್ಮಿಕ ಸಚಿವಾಲಯ

**ವಿಷಯ :** ಉದ್ಯೋಗ ಮತ್ತು ತರಬೇತಿ ಇಲಾಖೆಯ ತರಬೇತಿ ವಿಭಾಗದಲ್ಲಿ ದಿನಾಂಕ: 01.04.2000ದಂದು ಖಾಲಿ ಇದ್ದ ಹುದ್ದೆಗಳಲ್ಲಿ ಶೇಕಡ 80ರಷ್ಟು ಹುದ್ದೆಗಳನ್ನು ರದ್ದುಗೊಳಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 6 ಈಕಾಅ 2000 ದಿನಾಂಕ: 04.10.2000.

2. ದಿನಾಂಕ: 30.10.2002ರಂದು ರಾಜ್ಯ ಸರ್ಕಾರದ ಇಲಾಖೆಗಳಲ್ಲಿ ಶೇಕಡ 80ರಷ್ಟು ಖಾಲಿ ಹುದ್ದೆಗಳನ್ನು ರದ್ದುಗೊಳಿಸುವ ಬಗ್ಗೆ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು.

3. ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇಲಾಖೆ ಅವರ ಪತ್ರ ಸಂಖ್ಯೆ: ಉತಇ: ತರಬೇತಿ: ಆಡಳಿತ-1:ವಿವ-15:2000-01, ದಿನಾಂಕ: 24.04.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ: 04.10.2000ದ ಆದೇಶದಲ್ಲಿ 2000-01ನೇ ಸಾಲಿನ ಆಯವ್ಯಯದ ಭಾಷಣದಲ್ಲಿ ಸನ್ಮಾನ್ಯ ಮುಖ್ಯಮಂತ್ರಿಗಳು ಪ್ರಸ್ತಾಪಿಸಲಾದಂತೆ ಸರ್ಕಾರದ ಇಲಾಖೆಗಳಲ್ಲಿ ಖಾಲಿ ಇರುವ ಹುದ್ದೆಗಳ ಸ್ಥಿತಿಯನ್ನು ವಿಮರ್ಶಿಸಿ ಅವುಗಳಲ್ಲಿ ಶೇಕಡ 80ರಷ್ಟು ಹುದ್ದೆಗಳನ್ನು ರದ್ದುಗೊಳಿಸುವ ಬಗ್ಗೆ ಪರಿಶೀಲಿಸಲು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಕಾರ್ಯತಂಡವನ್ನು ರಚಿಸಲಾಗಿತ್ತು.

ಮೇಲೆ ಓದಲಾದ (ಕ್ರಮ ಸಂಖ್ಯೆ: 2ರಲ್ಲಿ) ರಾಜ್ಯ ಸರ್ಕಾರದ ಇಲಾಖೆಗಳಲ್ಲಿ ಶೇಕಡ 80ರಷ್ಟು ಖಾಲಿ ಹುದ್ದೆಗಳನ್ನು ರದ್ದುಗೊಳಿಸಲು ದಿನಾಂಕ: 30.10.2002ರಲ್ಲಿ ನಡೆದ ಸಭೆಯ ನಡವಳಿಯನ್ವಯ ಉದ್ಯೋಗ ಮತ್ತು ತರಬೇತಿ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳ ಶೇಕಡ 80ರಷ್ಟು ಹುದ್ದೆಗಳನ್ನು ರದ್ದುಗೊಳಿಸುವ ಬಗ್ಗೆ ಸೂಕ್ತ ಪ್ರಸ್ತಾವನೆಯನ್ನು ಕಳುಹಿಸುವಂತೆ ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇಲಾಖೆ ರವರಿಗೆ ಸೂಚಿಸಲಾಗಿತ್ತು.

ಮೇಲೆ ಓದಲಾದ (ಕ್ರಮಸಂಖ್ಯೆ: 3)ರಲ್ಲಿ ದಿನಾಂಕ: 24.04.2004ರ ಪತ್ರದಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯ ನಿರ್ದೇಶಕರು, ತರಬೇತಿ ವಿಭಾಗದಲ್ಲಿನ ದಿನಾಂಕ: 01.04.2000ದಂದು ವಿವಿಧ ವೃಂದಗಳಲ್ಲಿ 757 ಖಾಲಿ ಹುದ್ದೆಗಳ ಪೈಕಿ ಶೇಕಡ 80ರಂತೆ 603 ಹುದ್ದೆಗಳಾಗುತ್ತವೆ. ಆದರೆ ತರಬೇತಿ ವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿರುವ 104 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ ವಿವಿಧ ವೃತ್ತಿಗಳಲ್ಲಿ 1174 ಘಟಕಗಳನ್ನು ಅನುಷ್ಠಾನಗೊಳಿಸುತ್ತಿದ್ದು ಡಿ.ಜಿ.ಇ.ಟಿ. ನಾರಮ್ಸ್‌ನಂತೆ ಯೋಜನಾ ಕಾರ್ಯಕ್ರಮಗಳನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸುವ ಸಲುವಾಗಿ ಖಾಲಿ ಇರುವ 757 ಹುದ್ದೆಗಳು ಅಗತ್ಯವಾಗಿರುತ್ತವೆಂದು, ಪ್ರಸ್ತುತ 757 ಖಾಲಿ ಹುದ್ದೆಗಳಲ್ಲಿ 131 ಹುದ್ದೆಗಳನ್ನು ರದ್ದುಗೊಳಿಸಬಹುದಾಗಿದೆ, ಎಂದು ತಿಳಿಸುತ್ತಾ ರದ್ದುಗೊಳಿಸಬಹುದಾದ ಹುದ್ದೆಗಳ ವಿವರಗಳನ್ನು ಅನುಬಂಧದಲ್ಲಿ ಸಲ್ಲಿಸಿರುತ್ತಾರೆ.

ಉದ್ಯೋಗ ಮತ್ತು ತರಬೇತಿ ಇಲಾಖೆಯ ತರಬೇತಿ ವಿಭಾಗದಲ್ಲಿ ದಿನಾಂಕ: 01.04.2000ದಂದು ವಿವಿಧ ವೃಂದಗಳಲ್ಲಿ ಖಾಲಿ ಇದ್ದ ಒಟ್ಟು 757 ಹುದ್ದೆಗಳ ಪೈಕಿ 131 ಹುದ್ದೆಗಳನ್ನು ರದ್ದುಪಡಿಸಲು ತೀರ್ಮಾನಿಸಿದೆ.

ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 10 ಇಟಿಎಂ 2002, ಬೆಂಗಳೂರು, ದಿನಾಂಕ: 19ನೇ ಆಗಸ್ಟ್, 2004**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಉದ್ಯೋಗ ಮತ್ತು ತರಬೇತಿ ಇಲಾಖೆಯಲ್ಲಿ ತರಬೇತಿ ವಿಭಾಗದಲ್ಲಿ ದಿನಾಂಕ: 01.04.2000ದಂದು ಖಾಲಿ ಇದ್ದ ಹುದ್ದೆಗಳ ವಿವರಗಳನ್ನು ಇದರೊಂದಿಗೆ ಲಗತ್ತಿಸಿರುವ ಅನುಬಂಧದಲ್ಲಿ ನಮೂದಿಸಿರುವಂತೆ ಒಟ್ಟು 131 (ಒಂದುನೂರ ಮೂವತ್ತೊಂದು) ಹುದ್ದೆಗಳನ್ನು ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಸುಬ್ರಮಣ್ಯರಾವ್**

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ).

**ಸರ್ಕಾರಿ ಆದೇಶ ಸಂಖ್ಯೆ: ಕಾಇ 10 ಇಟಿಎಂ 2002, ದಿನಾಂಕ: 19.08.2004ರ ಅನುಬಂಧ**

**ಉದ್ಯೋಗ ಮತ್ತು ತರಬೇತಿ ಇಲಾಖೆಯಲ್ಲಿನ ತರಬೇತಿ ವಿಭಾಗದಲ್ಲಿ ದಿನಾಂಕ: 01.04.2000ರಂದು ಖಾಲಿ ಇದ್ದ ಹುದ್ದೆಗಳಲ್ಲಿ ರದ್ದುಪಡಿಸಲಾದ ಹುದ್ದೆಗಳ ವಿವರ**

| ಕ್ರಮ ಸಂಖ್ಯೆ | ಹುದ್ದೆಯ ಹೆಸರು | ಕಛೇರಿಯ ಹೆಸರು | | ರದ್ದುಪಡಿಸಲಾದ ಹುದ್ದೆಗಳ ಸಂಖ್ಯೆ |
|---|---|---|---|---|
| 1 | 2 | 3 | | 4 |
| 1. | ಸಹಾಯಕ ನಿರ್ದೇಶಕರು | ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ | | 01 |
| | | | **ಒಟ್ಟು** | 01 |
| 2. | ಕಾರ್ಯಾಗಾರ ಸಹಾಯಕರು | 1. | ಸರ್ಕಾರಿ ಕೈ.ತ.ಸಂ. ಹೊಸೂರು ರಸ್ತೆ, ಬೆಂಗಳೂರು | 03 |
| | | 2. | ಸರ್ಕಾರಿ ಕೈ.ತ.ಸಂ. ವಿವೇಕನಗರ, ಬೆಂಗಳೂರು | 02 |
| | | 3. | ಸರ್ಕಾರಿ ಕೈ.ತ.ಸಂ. ತುಮಕೂರು ರಸ್ತೆ, ಬೆಂಗಳೂರು. | 09 |
| | | 4. | ಸರ್ಕಾರಿ ಕೈ.ತ.ಸಂ. ಅಮ್ಮಸಂದ್ರ | 01 |
| | | 5. | ಸರ್ಕಾರಿ ಕೈ.ತ.ಸಂ. ಕೆ.ಜಿ.ಎಫ್. | 03 |
| | | 6. | ಸರ್ಕಾರಿ ಕೈ.ತ.ಸಂ. ದಾವಣಗೆರೆ | 04 |
| | | 7. | ಸರ್ಕಾರಿ ಕೈ.ತ.ಸಂ. ಭದ್ರಾವತಿ | 04 |
| | | 8. | ಸರ್ಕಾರಿ ಕೈ.ತ.ಸಂ. ಮೈಸೂರು-7 | 03 |
| | | 9. | ಸರ್ಕಾರಿ ಕೈ.ತ.ಸಂ. ನಂಜನಗೂಡು | 01 |
| | | 10. | ಸರ್ಕಾರಿ ಕೈ.ತ.ಸಂ. ಗುಂಡ್ಲುಪೇಟೆ | 02 |
| | | 11. | ಸರ್ಕಾರಿ ಕೈ.ತ.ಸಂ. ಮಳವಳ್ಳಿ | 02 |
| | | 12. | ಸರ್ಕಾರಿ ಕೈ.ತ.ಸಂ. ಪಾಂಡವಪುರ | 01 |
| | | 13. | ಸರ್ಕಾರಿ ಕೈ.ತ.ಸಂ. ಹಾಸನ | 02 |
| | | 14. | ಸರ್ಕಾರಿ ಕೈ.ತ.ಸಂ. ಚನ್ನರಾಯಪಟ್ಟಣ | 01 |
| | | 15. | ಸರ್ಕಾರಿ ಕೈ.ತ.ಸಂ. ಮಡಿಕೇರಿ | 02 |
| | | 16. | ಸರ್ಕಾರಿ ಕೈ.ತ.ಸಂ. ಪೊನ್ನಂಪೇಟೆ | 01 |
| | | 17. | ಸರ್ಕಾರಿ ಕೈ.ತ.ಸಂ. ಮಂಗಳೂರು | 04 |
| | | 18. | ಸರ್ಕಾರಿ ಕೈ.ತ.ಸಂ. ಬೆಳ್ತಂಗಡಿ | 01 |
| | | 19. | ಸರ್ಕಾರಿ ಕೈ.ತ.ಸಂ. ಬೆಳಗಾಂ | 02 |
| | | 20. | ಸರ್ಕಾರಿ ಕೈ.ತ.ಸಂ. ನಿಪ್ಪಾಣಿ | 01 |
| | | 21. | ಸರ್ಕಾರಿ ಕೈ.ತ.ಸಂ. ಹುಬ್ಬಳ್ಳಿ | 08 |
| | | 22. | ಸರ್ಕಾರಿ ಕೈ.ತ.ಸಂ. ಕಲಘಟಗಿ | 01 |
| | | 23. | ಸರ್ಕಾರಿ ಕೈ.ತ.ಸಂ. ಗದಗ | 01 |
| | | 24. | ಸರ್ಕಾರಿ ಕೈ.ತ.ಸಂ. ಗುತ್ತಲ | 01 |
| | | 25. | ಸರ್ಕಾರಿ ಕೈ.ತ.ಸಂ. ಅಕ್ಕಿಆಲೂರು | 01 |

| 1 | 2 | 3 | | 4 |
|---|---|---|---|---|
| | ಕಾರ್ಯಾಗಾರ ಸಹಾಯಕರು | 26. | ಸರ್ಕಾರಿ ಕೈ.ತ.ಸಂ. ಹಳಿಯಾಳ | 02 |
| | | 27. | ಸರ್ಕಾರಿ ಕೈ.ತ.ಸಂ. ಪಾಳಾ | 01 |
| | | 28. | ಸರ್ಕಾರಿ ಕೈ.ತ.ಸಂ. ಬಿಜಾಪುರ | 02 |
| | | 29. | ಸರ್ಕಾರಿ ಕೈ.ತ.ಸಂ. ಸಾಲತ್‌ವಾಡ | 01 |
| | | 30. | ಸರ್ಕಾರಿ ಕೈ.ತ.ಸಂ. ಗುಲ್ಬರ್ಗಾ | 04 |
| | | 31. | ಸರ್ಕಾರಿ ಕೈ.ತ.ಸಂ. ಗುಲ್ಬರ್ಗಾ (ಮಹಿಳಾ) | 01 |
| | | 32. | ಸರ್ಕಾರಿ ಕೈ.ತ.ಸಂ. ಬಳ್ಳಾರಿ | 04 |
| | | 33. | ಸರ್ಕಾರಿ ಕೈ.ತ.ಸಂ. ಹೂವಿನಹಡಗಲಿ | 02 |
| | | 34. | ಸರ್ಕಾರಿ ಕೈ.ತ.ಸಂ. ಕೂಡ್ಲಿಗಿ | 01 |
| | | 35. | ಸರ್ಕಾರಿ ಕೈ.ತ.ಸಂ. ವಿಠಲಾಪುರ | 01 |
| | | 36. | ಸರ್ಕಾರಿ ಕೈ.ತ.ಸಂ. ಹುಮನಾಬಾದ್ | 01 |
| | | 37. | ಸರ್ಕಾರಿ ಕೈ.ತ.ಸಂ. ರಾಯಚೂರು | 04 |
| | | 38. | ಸರ್ಕಾರಿ ಕೈ.ತ.ಸಂ. ಮುದುಗಲ್ | 01 |
| | | 39. | ಸರ್ಕಾರಿ ಕೈ.ತ.ಸಂ. ಕೊಪ್ಪಳ | 01 |
| | | 40. | ಸರ್ಕಾರಿ ಕೈ.ತ.ಸಂ. ಮಂಗಳೂರು ಗ್ರಾಮ | 01 |
| | | | **ಒಟ್ಟು** | **86** |
| 3. | ಬೆರಳಚ್ಚುಗಾರರು | 1. | ಸರ್ಕಾರಿ ಕೈ.ತ.ಸಂ. ಪಾವಗಡ | 01 |
| | | 2. | ಸರ್ಕಾರಿ ಕೈ.ತ.ಸಂ. ಚೆನ್ನಗಿರಿ | 01 |
| | | 3. | ಸರ್ಕಾರಿ ಕೈ.ತ.ಸಂ. ಭರಮಸಾಗರ | 01 |
| | | 4. | ಸರ್ಕಾರಿ ಕೈ.ತ.ಸಂ. ಹುಣಸೂರು | 01 |
| | | 5. | ಸರ್ಕಾರಿ ಕೈ.ತ.ಸಂ. ಪಿರಿಯಾಪಟ್ಟಣ | 01 |
| | | 6. | ಸರ್ಕಾರಿ ಕೈ.ತ.ಸಂ. ಕೊಳ್ಳೇಗಾಲ | 01 |
| | | 7. | ಸರ್ಕಾರಿ ಕೈ.ತ.ಸಂ. ಪಾಂಡವಪುರ | 01 |
| | | 8. | ಸರ್ಕಾರಿ ಕೈ.ತ.ಸಂ. ಕೆ.ಎಂ. ದೊಡ್ಡಿ | 01 |
| | | 9. | ಸರ್ಕಾರಿ ಕೈ.ತ.ಸಂ. ಅರಸೀಕೆರೆ | 01 |
| | | 10. | ಸರ್ಕಾರಿ ಕೈ.ತ.ಸಂ. ಅರಕಲಗೂಡು | 01 |
| | | 11. | ಸರ್ಕಾರಿ ಕೈ.ತ.ಸಂ. ಪೊನ್ನಂಪೇಟೆ | 01 |
| | | 12. | ಸರ್ಕಾರಿ ಕೈ.ತ.ಸಂ. ಉಡುಪಿ | 01 |
| | | 13. | ಸರ್ಕಾರಿ ಕೈ.ತ.ಸಂ. ಪೆರಡೂರು | 01 |
| | | 14. | ಸರ್ಕಾರಿ ಕೈ.ತ.ಸಂ. ಕಡೂರು | 01 |
| | | 15. | ಸರ್ಕಾರಿ ಕೈ.ತ.ಸಂ. ತರೀಕೆರೆ | 01 |
| | | 16. | ಸರ್ಕಾರಿ ಕೈ.ತ.ಸಂ. ಹೆಗ್ಗಡದೇವನಕೋಟೆ | 01 |
| | | 17. | ಸರ್ಕಾರಿ ಕೈ.ತ.ಸಂ. ನಿಪ್ಪಾಣಿ | 01 |
| | | 18. | ಸರ್ಕಾರಿ ಕೈ.ತ.ಸಂ. ನೇಸರ್ಗಿ | 01 |
| | | 19. | ಸರ್ಕಾರಿ ಕೈ.ತ.ಸಂ. ರಾಮದುರ್ಗ | 01 |
| | | 20. | ಸರ್ಕಾರಿ ಕೈ.ತ.ಸಂ. ಕಲಘಟಗಿ | 01 |
| | | 21. | ಸರ್ಕಾರಿ ಕೈ.ತ.ಸಂ. ಗದಗ | 01 |
| | | 22. | ಸರ್ಕಾರಿ ಕೈ.ತ.ಸಂ. ಮುಂಡರಗಿ | 01 |
| | | 23. | ಸರ್ಕಾರಿ ಕೈ.ತ.ಸಂ. ಸೂಡಿ | 01 |
| | | 24. | ಸರ್ಕಾರಿ ಕೈ.ತ.ಸಂ. ಗುತ್ತಲ | 01 |
| | | 25. | ಸರ್ಕಾರಿ ಕೈ.ತ.ಸಂ. ಅಕ್ಕಿಆಲೂರು | 01 |
| | | 26. | ಸರ್ಕಾರಿ ಕೈ.ತ.ಸಂ. ಪಾಳಾ | 01 |
| | | 27. | ಸರ್ಕಾರಿ ಕೈ.ತ.ಸಂ. ಬಬಲೇಶ್ವರ | 01 |
| | | 28. | ಸರ್ಕಾರಿ ಕೈ.ತ.ಸಂ. ಬೀಳಗಿ | 01 |

| 1 | 2 | 3 | | 4 |
|---|---|---|---|---|
| | ಬೆರಳಚ್ಚುಗಾರರು | 29. | ಸರ್ಕಾರಿ ಕೈ.ತ.ಸಂ. ಗುಳೇದಗುಡ್ಡ | 01 |
| | | 30. | ಸರ್ಕಾರಿ ಕೈ.ತ.ಸಂ. ಸದಲಗಾ | 01 |
| | | 31. | ಸರ್ಕಾರಿ ಕೈ.ತ.ಸಂ. ನರಗುಂದ | 01 |
| | | 32. | ಸರ್ಕಾರಿ ಕೈ.ತ.ಸಂ. ಜಮಖಂಡಿ | 01 |
| | | 33. | ಸರ್ಕಾರಿ ಕೈ.ತ.ಸಂ. ಗುಲ್ಬರ್ಗಾ (ಮಹಿಳಾ) | 01 |
| | | 34. | ಸರ್ಕಾರಿ ಕೈ.ತ.ಸಂ. ಚಿಂದೋಳಿ | 01 |
| | | 35. | ಸರ್ಕಾರಿ ಕೈ.ತ.ಸಂ. ಗುರುಮಿಟ್ಕಲ್ | 01 |
| | | 36. | ಸರ್ಕಾರಿ ಕೈ.ತ.ಸಂ. ಕೂಡ್ಲಗಿ | 01 |
| | | 37. | ಸರ್ಕಾರಿ ಕೈ.ತ.ಸಂ. ವಿಠಲಾಪುರ | 01 |
| | | 38. | ಸರ್ಕಾರಿ ಕೈ.ತ.ಸಂ. ಹುಮನಾಬಾದ್ | 01 |
| | | 39. | ಸರ್ಕಾರಿ ಕೈ.ತ.ಸಂ. ಮುದುಗಲ್ | 01 |
| | | 40. | ಸರ್ಕಾರಿ ಕೈ.ತ.ಸಂ. ಲಿಂಗಸಗೂರು | 01 |
| | | 41. | ಸರ್ಕಾರಿ ಕೈ.ತ.ಸಂ. ಕೊಪ್ಪಳ | 01 |
| | | 42. | ಸರ್ಕಾರಿ ಕೈ.ತ.ಸಂ. ಮಂಗಳೂರು ಗ್ರಾಮ | 01 |
| | | 43. | ಸರ್ಕಾರಿ ಕೈ.ತ.ಸಂ. ತಳಕಲ್ | 01 |
| | | 44. | ಸರ್ಕಾರಿ ಕೈ.ತ.ಸಂ. ಹನುಮಸಾಗರ | 01 |
| | | | ಒಟ್ಟು | 44 |

**ಎನ್. ಸುಬ್ರಮಣ್ಯರಾವ್**
ಪೀಠಾಧಿಕಾರಿ,
ಪಿ.ಆರ್.966 ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ).

## LAW SECRETARIAT

**Subject:** Appointing Sri V.B. Naik, Public Prosecutor, Principal District and Sessions Judge Court Mysore to conduct S.C. No. 184/02 on the file of Fast Track Court-IV, Mysore.

**Read:** Letter No. DPN/ADM/26-04-06, Dated: 05.05.04, from the Director of Prosecutions, Bangalore.

**Government Order No. LAW 1027 LMC 04, Bangalore, Dated: 28th August, 2004**

Government are pleased to appoint Public Prosecutor, attached to the Court of the Principal District and Sessions Judge, Mysore as the special Public Prosecutor to Conduct the Case in SC. No. 184/02, on the file of the Fast Track Court-IV, Mysore with immediate effect.

By Order and in the name of the Governor of Karnataka,
**VINEETHA P. SHETTY**
PR-967 Asst. Solicitor & Ex-Officio,
I/C Under Secretary to Government,
Law Department (Lit-II).

**Subject:** Appointing Sri Vidyadhar, Public Prosecutor, Special Court, Gulbarga to conduct case in S.C. No. 292/01 on the file of Fast Track Court, Yadagiri.

**Read:** Letter No. DPN/ADM/35/04-05, Dated: 19.05.04, from the Director of Prosecutions, Bangalore.

**Government Order No. LAW 1580 LGC 2004, Bangalore, Dated: 27th August, 2004**

Government are pleased to appoint Sri Vidyadhar, Public Prosecutor, Special District and Sessions Court, Gulbarga as the Special Public Prosecutor to conduct the case in SC. No. 292/01 on the file of the Fast Tract Court, Yadagiri with immediate effect.

By Order and in the name of the Governor of Karnataka,
**VINEETHA P. SHETTY**
PR-968 Asst. Solicitor & Ex-Officio,
I/C Under Secretary to Government,
Law Department (Lit-IV).